| Sl. No. | Commodity | Central Excise Tariff Code | Rate of Tax |
|---|---|---|---|
| 2. | Vulcanised | 4008.29.40 | 12.5% under Section 4(1)(b) of the Karnataka Value Added Tax Act, 2003. |
| 3. | Vulcanisation solution | 3506.91.90 | 12.5% under Section 4(1)(b) of the Karnataka Value Added Tax Act, 2003. |

**B.A. HARISH GOWDA**

PR-5 Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act 2003-Clarification under Section 59(4) regarding the rate of tax applicable on "Two wheeler spare parts".

**Ref:** Application Dated:26.10.2006 of Sri B.V. Venkatesha Murthy, Auto Assembly, 479, 8th Main Road, Hanumanthanagar, Bangalore-560019.

In its application cited at reference (1) above, the dealer had sought clairification regarding the rate of tax applicable on "Two wheeler spare parts".

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clairification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR. 138/ 06-07, Dated:7th December, 2006**

It is hereby clarified that the fastners and bearings used as parts of motor vehicle are taxable at 12.5% under Section 4(1)(b) of the Karnataka Value Added Tax Act, 2003.

**B.A. HARISH GOWDA**

PR-6 Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act 2003-Clarification under Section 59(4) regarding the rate of tax applicable on "ceramic tiles" and "earthen tiles".

**Ref:** Application Dated:06.10.2006 of M/s Dheemanth Ceramics (P) Ltd., No.10, Pallavi Complex, Mission Road, Bangalore-27.

In its application cited at reference above, the applicant has sought clarification regarding rate of tax applicable on "ceramic tiles" and "earthen tiles".

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clairification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR. 166/ 06-07, Dated:18th December, 2006**

It is hereby clarified that:

(a) "ceramic tiles" are taxable at 12.5% under Section 4(1)(b) of The Karnataka Value Added Tax Act, 2003.

(b) "earthen tiles" are taxable at 4% under sl.no.2 of the Third Schedule to the Karnataka Value Added Tax Act, 2003.

**B.A. HARISH GOWDA**

PR-7 Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE UNDER SECTION 59(4) OF THE KARNATAKA VALUE ADDED TAX ACT, 2003**

**Preamble:**

**Sub:** KVAT Act 2003-Clarification under Section 59(4) regarding the rate of tax applicable on electrical cables for voltage exceeding 1000volts.

**Ref:** Application Dated:26.10.2006 of M/s Anchor Electrical Pvt. Ltd., Mysore Road, Bangalore-18.

In its application cited at reference (1) above, the dealer had sought clarification regarding the rate of tax applicable on electrical cables voltage exceeding 1000 volts.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clairification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR. 182/ 06-07, Dated:4th December, 2006**

It is hereby clarified that electrical cables for voltage exceeding 1000 volts is taxable at 4% under entry 52 of the Third Schedule to the Karnataka Value Added Tax Act, 2003.

**B.A. HARISH GOWDA**

PR-8

Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE CLARIFICATION- UNDER SECTION 59(4) OF THE KARNATAKA VALUE ADDED TAX ACT, 2003**

**Preamble:**

**Sub:** KVAT Act 2003-Clarification under Section 59(4) regarding the rate of tax applicable on Bio diesel.

**Ref:** Application Dated:27.11.2006 of M/s Vardhaman Distributors, No.478, 6th Cross, Bhagyanagar, Belgaum.

In its application cited at reference (1) above, the dealer had sought clarification regarding the rate of tax applicable on Bio diesel.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR. 186/ 06-07, Dated:20th December, 2006**

It is hereby clarified that "Bio diesel" is taxable at 12.5% under Section 4(1)(b) of the Karnataka Value Added Tax Act, 2003.

**B.A. HARISH GOWDA**

PR-9

Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE CLARIFICATION- UNDER SECTION 12(7) OF THE KARNATAKA ON ENTRY OF GOODS ACT, 1979**

**Preamble:**

**Sub:** KTEG Act 1979-Clarification under Section 12(7) regarding the rate of tax applicable on Bio diesel.

**Ref:** Application Dated:27.11.2006 of M/s Vardhaman Distributors, No.478, 6th Cross, Bhagyanagar, Belgaum.

In its application cited at reference (1) above, the dealer had sought clarification regarding the rate of tax applicable on Bio diesel.

2. Section 12(7) of the Karnataka Tax on Entry of Goods Act, 1979 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity int he work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR. 186/ 06-07, Dated:20th December, 2006**

It is hereby clarified that "Bio diesel" is exempted from tax under the Karnataka Tax on Entry of Goods Act, 1979.

**B.A. HARISH GOWDA**
Commissioner of Commercial Taxes,
(Karnataka), Bangalore.

PR-10

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ ಉತ್ತರ ಕನ್ನಡ ಕಾರವಾರ**
**ನಂ.ಜಿಸಕಅ:ಕಾ.ತ. ಬೇ:ಪ್ರಕಟಣೆ: ಎಸ್-4: ಸಿಆರ್-14:06-07, ದಿನಾಂಕ:18ನೇ ನವೆಂಬರ್, 2006**

**ವಿಷಯ:** 2006-07ನೇ ಸಾಲಿನ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ತರಬೇತಿ ಮತ್ತು ಧನ ಸಹಾಯ ನೀಡುವ ಬಗ್ಗೆ.

2006-07ನೇ ಸಾಲಿಗೆ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ನಿರುದ್ಯೋಗಿ ಕಾನೂನು ಪದವೀಧರರಿಗೆ ಸ್ವತಂತ್ರವಾಗಿ ವಕೀಲ ವೃತ್ತಿ ಪ್ರಾರಂಭಿಸಲು ಸಹಾಯವಾಗುವಂತೆ ಪ್ರತಿಯೊಬ್ಬ ಕಾನೂನು ಪದವೀಧರರಿಗೆ 4 ವರ್ಷಗಳ ತರಬೇತಿ ಮತ್ತು ಬಾರ್ ಕೌನ್ಸಿಲ್‌ನಲ್ಲಿ ಹೆಸರು ನೊಂದಾಯಿಸಲು ಹಾಗೂ ಕಾನೂನು ಗ್ರಂಥಗಳನ್ನು ಖರೀದಿಸಲು ರೂ.5000-00 ಮೀರದಂತೆ ಧನ ಸಹಾಯ ನೀಡಲಾಗುತ್ತದೆ. ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ನಿರುದ್ಯೋಗಿ ಕಾನೂನು ಪದವೀದರರಿಗೆ ವಾರ್ಷಿಕ ವರಮಾನ ರೂ.18000-00 ಮೀರದಂತೆ ಇರುವ ಅಭ್ಯರ್ಥಿಗಳು ಸದರ ಸೌಲಭ್ಯಕ್ಕೆ ಅರ್ಹರಿರುತ್ತಾರೆ. ಆದ್ದರಿಂದ ತರಬೇತಿ ಪಡೆಯಲಿಚ್ಚಿಸುವ ಅರ್ಹ ಅಭ್ಯರ್ಥಿಗಳು ತಮ್ಮ ಮನವಿಗಳನ್ನು ದಿನಾಂಕ:30.11.2006 ರೊಳಗಾಗಿ ಸಂಬಂಧಪಟ್ಟ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಕಾರವಾರ ಇಲ್ಲಿಗೆ ಅರ್ಜಿ ಸಲ್ಲಿಸುವುದು. ಅರ್ಜಿ ನಮೂನೆ ಹಾಗೂ ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರ ಕಛೇರಿ ಕಾರವಾರ ರವರಿಗೆ ಸಂಪರ್ಕಿಸಬಹುದು.

1. ಅರ್ಜಿದಾರರ ಗರಿಷ್ಠ ವಯೋಮಿತಿಯು ಅರ್ಜಿ ಸ್ವೀಕರಿಸಿದ ಕೊನೆಯ ದಿನಾಂಕದಂದು 30 ವರ್ಷ ಮೀರಿರಬಾರದು.
2. ಆಯ್ಕೆಯಾದ ಅಭ್ಯರ್ಥಿಗೆ ಡಿಸ್ಟ್ರಿಕ್ ಪಬ್ಲಿಕ್ ಪ್ರಾಸಿಕ್ಯೂಟರ್ ಗವರ್ನಮೆಂಟ್ ಅಡ್ವೋಕೇಟ್ ಅಥವಾ 20 ವರ್ಷಕ್ಕಿಂತ ಹೆಚ್ಚಿಗೆ ವಕೀಲ ವೃತ್ತಿ ನಡೆಸುತ್ತಿರುವ ವಕೀಲರ ಮುಖಾಂತರ ತರಬೇತಿ ನೀಡಲಾಗುವುದು.
3. ತರಬೇತಿಗಾಗಿ ಆಯ್ಕೆ ಮಾಡಿಕೊಳ್ಳಬೇಕಾದ ಅಭ್ಯರ್ಥಿಯು ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ತಾರೀಖಿನ ಹಿಂದೆ 2 ವರ್ಷಗಳ ವಕೀಲ ವೃತ್ತಿ ಮಾಡಿರಬೇಕು.
4. ಅರ್ಜಿ ಸಲ್ಲಿಸುವಾಗ ಎಲ್ಲಾ ದಾಖಲಾತಿ ಪತ್ರಗಳನ್ನು ದೃಢೀಕರಿಸಿ ಸಲ್ಲಿಸುವುದು.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ
ಉತ್ತರ ಕನ್ನಡ, ಕಾರವಾರ.

ಪಿ.ಆರ್.1671

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು-ಇವರ ನ್ಯಾಯಾಲಯ**
**ಸಂಖ್ಯೆ: ಡಬ್ಲ್ಯೂಸಿಎ: ಎಸ್.ಆರ್-111/ 2006 ಎಫ್, ದಿನಾಂಕ:10ನೇ ನವೆಂಬರ್, 2006**

**ಅರ್ಜಿದಾರರು**
1. ಶ್ರೀ ಡಿ.ಆರ್. ಕೃಷ್ಣೇಗೌಡ, ಬಿನ್ ರಾಜಪ್ಪ.
2. ಶ್ರೀಮತಿ ಕೃಷ್ಣಮ್ಮ ಕೋಂ: ಕೃಷ್ಣೇಗೌಡ,
3. ಡಿ.ಕೆ. ಹೇಮಾವತಿ ಬಿನ್ ಕೃಷ್ಣೇಗೌಡ,
ವಾಸ: ಶಾಂತಿಗ್ರಾಮ ಹೋಬಳಿ,
ಮಡೆನೂರು ಅಂಚೆ, ಜುಂಜನಹಳ್ಳಿ, ಹಾಸನ.

**ಪ್ರತಿವಾದಿಗಳು**
1. ಕಾರ್ಯನಿರ್ವಾಹಕ ಇಂಜಿನೀಯರ್ (ವಿ) ವಿಭಾಗ ಕಛೇರಿ, ಮೆಸ್ಕಾಂ, ಪುತ್ತೂರು, ದಕ್ಷಿಣ ಕನ್ನಡ ಜಿಲ್ಲೆ.

**ಅಧಿಸೂಚನೆ**

ಅರ್ಜಿದಾರನಾದ ಶ್ರೀ ಅವಿನಹಳ್ಳಿ ಶೇಖರಪ್ಪ, ಇವರು ತಮ್ಮ ಮಗನಾದ ದಿ. ಶ್ರೀ ಡಿ.ಕೆ. ಸೋಮಶೇಖರ ಇವರು 1ನೇ ಪ್ರತಿವಾದಿಗಳಾದ ಕಾರ್ಯನಿರ್ವಾಹಕ ಇಂಜಿನೀಯರ್ (ವಿ) ವಿಭಾಗ ಕಛೇರಿ, ಮೆಸ್ಕಾಂ, ಪುತ್ತೂರು ದಕ್ಷಿಣ ಕನ್ನಡ ಜಿಲ್ಲೆ, ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:05.07.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಯಂ.ಎಸ್. ತಿಮ್ಮೋಲಿ**
ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಮಂಗಳೂರು ವಿಭಾಗ, ಮಂಗಳೂರು.

ಪಿ.ಆರ್.1673

**FORM NO.151**
**(See rule 315)**
**COMPANIES ACT, 1956**
**MEMBER'S VOLUNTARY WINDING UP**
**Notice by Liquidator of his appointment in Official Gazette**
**Under Section 516 and Rule 315**

| | | |
|---|---|---|
| Name of the Company | : | **GAGANTRIX-COMPANY PRIVATE LIMITED.** |
| Date of Incorporation of the Company | : | 24.03.2000 |
| Nature of business | : | Software Development |
| Address of Registered Office | : | 1937, A, Block, 11th Main, IInd Stage, Rajajinagar, Bangalore-560 010. |
| Name and address of Liquidator | : | Mr. S. Ravi Shankar, 102, Ground Floor, "Rams Infantry Manor", No.70, Infantry Road, Bangalore-560001. |
| Date of Appointment | : | 29th December, 2006. |
| By whom appointed | : | Members. |

PD-7 LIQUIDATOR.

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಬಸವಭವನ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

ಪ್ರಕಟಣೆ

ಸಂಖ್ಯೆ: ಕರಾಆ/ಆಡಳಿತ/೦೬/೨೦೦೬, ದಿನಾಂಕ: ೨ನೇ ಜನವರಿ, .೨೦೦೭

ವಿಷಯ: ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ರ ಕಲಂ ೧೦(೧ಎ) ರಡಿಯಲ್ಲಿ ಜಿಲ್ಲಾ ವೇದಿಕೆಯ ಸದಸ್ಯರ ಆಯ್ಕೆ ಬಗ್ಗೆ.

ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬(ಕೇಂದ್ರ ಕಾಯ್ದೆ ಸಂಖ್ಯೆ ೬೮/೧೯೮೬)ರಡಿಯಲ್ಲಿ ರಚಿತಗೊಂಡು ಗ್ರಾಹಕರ ವ್ಯಾಜ್ಯಗಳನ್ನು ಇತ್ಯರ್ಥಪಡಿಸುತ್ತಿರುವ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಕೊಡಗು ಜಿಲ್ಲೆ, ಕೊಡಗು, ಇದರ ಸದಸ್ಯರ(ಮಹಿಳಾ) ಸ್ಥಾನವು ದಿನಾಂಕ ೩೧.೦೫.೨೦೦೭ರಿಂದ ಹಾಲಿ ಸದಸ್ಯರಾಗಿರುವ ಶ್ರೀಮತಿ ಎ.ಎಸ್. ಹೇಮಲತಾ ಇವರ ಕಾಲಿಕ ಸೇವಾ ಅವಧಿಯು ಪೂರ್ಣಗೊಳ್ಳುವ ಪ್ರಯುಕ್ತ, ಖಾಲಿಯಾಗುವ ಹಿನ್ನಲೆಯಲ್ಲಿ ಸದರಿ ಸ್ಥಾನಕ್ಕೆ ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ರ ಕಲಂ ೧೦(೧)(ಬಿ)ರನುಸಾರ ಈ ಮುಂದಿನ ಅರ್ಹತೆಯನ್ನೊಳಗೊಂಡ ಅಭ್ಯರ್ಥಿಗಳು ಆಯ್ಕೆ ಬಯಸಿ ನಿಗಧಿತ ಅರ್ಜಿ ನಮೂನೆಯಲ್ಲಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಕೊಡಗು ಇಲ್ಲಿಂದ ಶುಲ್ಕವನ್ನು ಪಾವತಿ ಮಾಡುವ ಮೂಲಕ ಪಡೆದುಕೊಂಡು ಭರ್ತಿ ಮಾಡಿದ ಅರ್ಜಿಗಳನ್ನು ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ದಿನಾಂಕ ೧೫.೦೨.೨೦೦೭ರ ಸಂಜೆ ೫-೦೦ ಘಂಟೆಯೊಳಗೆ ಕೊಡಗು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಇಲ್ಲಿಗೆ ಸಲ್ಲಿಸುವುದು.

ಸದಸ್ಯರಾಗಿ ಆಯ್ಕೆ ಹೊಂದಲು ಇರುವ ನಿಗಧಿತ ವಿದ್ಯಾರ್ಹತೆಗಳು

೧. ಅರ್ಜಿ ಸಲ್ಲಿಸುವ ದಿನಾಂಕಕ್ಕೆ ೩೫ ವರ್ಷ ವಯಸ್ಸು ಮೀರಿರಬೇಕು ಹಾಗೂ ೬೦ ವರ್ಷ ವಯಸ್ಸು ಮೀರಿರಬಾರದು.
೨. ಅಂಗೀಕೃತ ವಿಶ್ವವಿದ್ಯಾನಿಲಯದಲ್ಲಿ ಯಾವುದಾದರು ವಿಷಯದಲ್ಲಿ ಪದವೀದರರಾಗಿರಬೇಕು.
೩. ಕಾನೂನು/ಆರ್ಥಿಕ/ವಾಣಿಜ್ಯ/ಕೈಗಾರಿಕೆ/ಸಾರ್ವಜನಿಕ ಆಡಳಿತ/ಸಾರ್ವಜನಿಕ ವ್ಯವಹಾರಗಳು/ಲೆಕ್ಕ, ಇವುಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಇತ್ಯರ್ಥಪಡಿಸಿರುವ ಕನಿಷ್ಠ ೧೦ ವರ್ಷಗಳ ಅನುಭವವನ್ನು ಹೊಂದಿರುವ ಜೊತೆಗೆ ನ್ಯಾಯವಾಗಿ, ಯೋಗ್ಯ ನಿಷ್ಠೆ ಪ್ರಾಮಾಣಿಕತೆ ಮತ್ತು ಗಣ್ಯತೆಯನ್ನು ಹೊಂದಿದವರಾಗಿರಬೇಕು.

ಕೊಡಗು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರು ಅರ್ಹ ಅಭ್ಯರ್ಥಿಗಳಿಗೆ ಮಾತ್ರ ನಿಗಧಿತ ಅರ್ಜಿ ನಮೂನೆಯನ್ನು ರೂ.೧೦/- ಶುಲ್ಕವನ್ನು ಪಡೆದುಕೊಂಡು ಜೆರಾಕ್ಸ್ ಪ್ರತಿಗಳನ್ನು ಅಭ್ಯರ್ಥಿಗಳಿಗೆ ಒದಗಿಸುವುದು. ಹೀಗೆ ಸಂಗ್ರಹವಾದ ಶುಲ್ಕವನ್ನು Consumer Protection Regulation ೨೦೦೫ ರ ಅನುಸಾರ ದೃಢೀಕೃತ ಪ್ರತಿಗಳನ್ನು ನೀಡುವಾಗ ಸಂಗ್ರಹವಾದ ಶುಲ್ಕವನ್ನು ಡೆಪಾಸಿಟ್ ಮಾಡುವ ರೀತಿಯಲ್ಲಿ ರಾಜ್ಯ ಲೆಕ್ಕ ಸ್ವೀಕೃತಿ ಶೀರ್ಷಿಕೆ ಸಂಖ್ಯೆ 1456-00-800-0-01 ಇದಕ್ಕೆ ಜಮಾ ಮಾಡುವುದು.

ದಿನಾಂಕ ೧೫.೦೨.೨೦೦೭ರ ಸಂಜೆ ೫-೦೦ ಘಂಟೆಯೊಳಗೆ ಸ್ವೀಕರಿಸಿದ ಲಕೋಟೆಗಳನ್ನು ಯಥಾಸ್ಥಿತಿಯಲ್ಲಿಯೇ ರಾಜ್ಯ ಆಯೋಗಕ್ಕೆ ಮರು ದಿನವೇ ಸಲ್ಲಿಸುವುದು.

ನ್ಯಾಯಮೂರ್ತಿ ಚಂದ್ರಶೇಖರಯ್ಯ
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು.

ಪಿ.ಆರ್. 26

## ಕೃಷಿ ಮಾರಾಟ ಇಲಾಖೆ

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು-01**

**ಅಧಿಸೂಚನೆ**

**ಸಂಖ್ಯೆ: ಕೃಮಾಇ: 181: ನಿಯವಿ: 2004, ಬೆಂಗಳೂರು, ದಿನಾಂಕ:23ನೇ ಡಿಸೆಂಬರ್, 2006**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 6ರ ಉಪಪ್ರಕರಣ (2)ರ ಮೇರೆಗೆ ಹೊರಡಿಸಿದ ಅಧಿಸೂಚನೆ ಸಂಖ್ಯೆ ಕೃಮಾಇ:22: ನಿಯವಿ:94(1), ದಿನಾಂಕ:18.12.1996 (ಇನ್ನು ಮುಂದೆ ಸದರಿ ಅಧಿಸೂಚನೆ ಎಂದು ಉಲ್ಲೇಖಿಸಲಾಗಿದೆ) ರಲ್ಲಿ ಕರ್ನಾಟಕ ಸರ್ಕಾರದ ಕೃಷಿ ಮಾರಾಟ ನಿರ್ದೇಶಕರು, ಬೆಂಗಳೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಗುಂಡ್ಲುಪೇಟೆ ನಗರಸಭಾ ಪರಿಮಿತಿಯೊಳಗಿನ ಪ್ರದೇಶವನ್ನು "ಮಾರುಕಟ್ಟೆ" ಎಂದು ಮತ್ತು ಅನುಸೂಚಿ "ಎ" ರಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು "ಮಾರುಕಟ್ಟೆ ಪ್ರಾಂಗಣ" ಎಂದು ಘೋಷಿಸಿದ್ದರು.

ಗುಂಡ್ಲುಪೇಟೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಸಮಿತಿ ವ್ಯಾಪ್ತಿಯ ಕಸಬಾ ಹೋಬಳಿ, ಪಂಜನಹಳ್ಳಿ ಗ್ರಾಮದ ಸರ್ವೆ ನಂ.179(1), 179(2), 179(3), 180(1), 180(2), 180(3ಎ), 180(3ಬಿ) ಹಾಗೂ 181(1)ರ 10.27 ಎಕರೆ ಪ್ರದೇಶವನ್ನು ಸಮಿತಿಯು ಸ್ವಾಧೀನಪಡಿಸಿಕೊಂಡು ಅಭಿವೃದ್ಧಿಪಡಿಸಿರುವ ಜಮೀನಿನ ಪ್ರದೇಶವನ್ನು ಸದರಿ ಅಧಿಸೂಚನೆಯಲ್ಲಿ ಘೋಷಿಸಲಾದ ಮಾರುಕಟ್ಟೆ ಪ್ರಾಂಗಣದ ಬದಲಾಗಿ ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು

ಸೀಮಾಬದ್ಧಗೊಳಿಸಿ "ಮಾರುಕಟ್ಟೆ ಪ್ರಾಂಗಣ" ಎಂದು ಘೋಷಿಸಲು ಉದ್ದೇಶವನ್ನು ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಕೃಮಾಇ: 181: ನಿಯವಿ. 2004, ದಿನಾಂಕ:29.09.2006ರನ್ನು ಕನ್ನಡಪ್ರಭ ದಿನಪತ್ರಿಕೆಯಲ್ಲಿ ದಿನಾಂಕ:09.10.2006 ಮತ್ತು ರಾಜ್ಯಪತ್ರದಲ್ಲಿ ದಿನಾಂಕ: 02.11.2006ರಂದು ಪ್ರಕಟಿಸಿ, ಸಲಹೆ/ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು. ಆದರೆ ಸದರಿ ಅಧಿಸೂಚನೆಗೆ ಸಂಬಂಧಿಸಿದಂತೆ ಯಾವುದೇ ಸಲಹೆ/ ಆಕ್ಷೇಪಣೆಗಳು ಈ ಕಛೇರಿಯಲ್ಲಿ ಸ್ವೀಕೃತಗೊಂಡಿರುವುದಿಲ್ಲ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 3ನ್ನು ಓದಿ ಪ್ರಕರಣ 6ರ ಉಪಪ್ರಕರಣ (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಜಿ.ಎಸ್. ನಾರಾಯಣಸ್ವಾಮಿ ಆದ ನಾನು, ಗುಂಡ್ಲುಪೇಟೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಸರ್ಕಾರದ ಅಧಿಸೂಚನೆ ಮೂಲಕ ಅಧಿಸೂಚಿಸಲ್ಪಟ್ಟಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಸದರಿ ಅಧಿಸೂಚನೆಯಲ್ಲಿ ಮಾರುಕಟ್ಟೆ ಪ್ರಾಂಗಣ ಘೋಷಣೆಗೆ ಸಂಬಂಧಿಸಿದ್ದರ ಮಟ್ಟಿಗೆ ನಿರ್ದಿಷ್ಟಪಡಿಸಿರುವ ಸ್ಥಳವನ್ನು ರದ್ದುಪಡಿಸಿ, ಗುಂಡ್ಲುಪೇಟೆ ಪುರಸಭೆ ವ್ಯಾಪ್ತಿಯ ಕಸಬಾ ಹೋಬಳಿ, ಪಂಜನಹಳ್ಳಿ ಗ್ರಾಮದ ಸರ್ವೆ ನಂ.179(1), 179(2), 179(3), 180(1), 180(2), 180(3ಎ), 180(3ಬಿ) ಹಾಗೂ 181(1)ರ 10.27 ಕೆರೆ ಪ್ರದೇಶವನ್ನು ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಸೀಮಾಬದ್ಧಗೊಳಿಸಿ "ಮಾರುಕಟ್ಟೆ ಪ್ರಾಂಗಣ" ಎಂದು ಈ ಮೂಲಕ ಘೋಷಿಸಲಾಗಿದೆ.

**ಅನುಸೂಚಿ**

ಗುಂಡ್ಲುಪೇಟೆ ಪುರಸಭೆ ವ್ಯಾಪ್ತಿಯ ಕಸಬಾ ಹೋಬಳಿ, ಪಂಜನಹಳ್ಳಿ ಗ್ರಾಮದ ವ್ಯಾಪ್ತಿಯ ಸರ್ವೆ ನಂ.179(1), 179(2), 179(3), 180(1), 180(2), 180(3ಎ), 180(3ಬಿ) ಹಾಗೂ 181(1)ರ 10.27 ಎಕರೆ ಸೀಮಾಬದ್ಧ ಸ್ಥಳ:

ಪೂರ್ವಕ್ಕೆ : ಮೈಸೂರು-ಊಟಿ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ: 212
ಪಶ್ಚಿಮಕ್ಕೆ : ಸರ್ವೆ ನಂ.193ರ ಜಮೀನು.
ಉತ್ತರಕ್ಕೆ : ಸರ್ವೆ ನಂ.214 ಮತ್ತು 215.
ದಕ್ಷಿಣಕ್ಕೆ : 179, 180, 181 ಹಾಗೂ 182ರ ಜಮೀನು.

ಜಿ.ಎಸ್. ನಾರಾಯಣಸ್ವಾಮಿ
ನಿರ್ದೇಶಕರು.

ಪಿ.ಆರ್.11

## ಶಿಕ್ಷಣ ಇಲಾಖೆ
## ಅಧಿಸೂಚನೆ
## ಸಂಖ್ಯೆ: ಇಡಿ 631 ಡಿಪಿಐ 2006, ಬೆಂಗಳೂರು, ದಿನಾಂಕ:16ನೇ ಡಿಸೆಂಬರ್, 2006

**ವಿಷಯ:** ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್-ಬಿ ವೃಂದದ (ವಿಶೇಷ ವರ್ಗ) ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2005 ರಲ್ಲಿದ್ದಂತೆ ಪ್ರಕಟಿಸುವ ಬಗ್ಗೆ- ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು.

ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್-ಬಿ ವೃಂದದ ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು (ವಿಶೇಷ ವರ್ಗ) ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2005 ರಲ್ಲಿರುವಂತೆ ತಯಾರಿಸಿ, ಲಗತ್ತಿಸಿರುವ ಅನುಬಂಧದಲ್ಲಿ ಪ್ರಕಟಿಸಲಾಗಿದೆ. ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ, ಭಾದಿತರಾದ ಅಧಿಕಾರಿಗಳು ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಸಲಹೆ ಸೂಚನೆಗಳಿದ್ದಲ್ಲಿ ಸಂಬಂಧಿಸಿದ ದಾಖಲೆಗಳೊಂದಿಗೆ, ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಿಗೆ ಸಲ್ಲಿಸಿ, ಅದರ ಪ್ರತಿಯನ್ನು ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ, ಬಹುಮಹಡಿಗಳ ಕಟ್ಟಡ, ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು, ಇವರಿಗೆ ಸಲ್ಲಿಸುವಂತೆ ಸೂಚಿಸಿದೆ. ನಿಗದಿತ ಅವಧಿ ಮುಗಿದ ನಂತರ ಬಂದ ಆಕ್ಷೇಪಣೆಗಳು, ಸಲಹೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸ್ವರ್ಣಲತಾ ಎಂ. ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2).

**ಅನುಬಂಧ**

**(ಸಂ.ಇಡಿ 631 ಡಿಪಿಐ 2006, ದಿನಾಂಕ:16.12.2006)**

**ಸಾರ್ವಜನಿಕ ಶಿಕ್ಷಣ ಇಲಾಖೆಯ ಗ್ರೂಪ್ ಬಿ ವೃಂದದ ವಿಷಯ ಪರಿವೀಕ್ಷಕರು (ವೃತ್ತಿ) (ವಿಶೇಷ ವರ್ಗ) ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿ ದಿನಾಂಕ:01.01.2005 ರಲ್ಲಿದ್ದಂತೆ**

| ಕ್ರ. ಸಂ. | ಗ್ರೇಡ್-ಎ ಕ್ರಮ ಸಂಖ್ಯೆ | ಜಾತಿ | ಅಧಿಕಾರಿಗಳ ಹೆಸರು ಶ್ರೀ/ ಶ್ರೀಮತಿ | ಜನ್ಮ ದಿನಾಂಕ | ಪ್ರಸ್ತುತ ಹುದ್ದೆಗೆ ಬಡ್ತಿ ಹೊಂದಿದ ದಿನಾಂಕ | ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | 03 | - | ಮುಷ್ತಾಕ್ ಅಹಮದ್ | 06.09.47 | 07.11.83 | - |
| 2. | | - | ಎಸ್.ಪಿ. ಕಾಗಲೆ | 05.12.54 | 18.01.89 | - |
| 3. | 05 | - | ಎ. ವಿಶ್ವನಾಥ್ | 13.01.50 | 18.07.96 | - |
| 4. | 12 | - | ಎಂ.ಎನ್. ಸದಾಶಿವರಾವ್ | 04.05.49 | 18.07.96 | - |
| 5. | 14 | - | ಕೆ.ಎಂ. ಪೂವಣ್ಣ | 10.02.46 | 18.07.96 | - |
| 6. | 132 | ಪ.ಜಾತಿ | ಪಿ. ವೆಂಕಟಸುಬ್ಬಯ್ಯ | 05.04.46 | 18.07.96 | - |
| 7. | 184 | ಪ.ಜಾತಿ | ಎನ್. ಪುಟ್ಟನಂಜಯ್ಯ | 09.08.50 | 18.07.96 | - |
| 8. | 193 | ಪ.ಜಾತಿ | ಟಿ. ಹನುಮಪ್ಪ | 09.03.47 | 18.07.96 | - |
| 9. | 208 | ಪ.ವರ್ಗ | ಎಂ. ರಾಮಯ್ಯ | 25.03.47 | 18.07.96 | - |

**ಸ್ವರ್ಣಲತಾ ಎಂ. ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2).

ಪಿ.ಆರ್.12

## ಜಿಲ್ಲಾ ಪಂಚಾಯಿತಿ ಉಪನಿರ್ದೇಶಕರ ಕಛೇರಿ ಸಾರ್ವಜನಿಕ ಶಿಕ್ಷಣ ಇಲಾಖೆ ಚಿಕ್ಕಮಗಳೂರು

## ನಡವಳಿಗಳು

**ವಿಷಯ:** ಶ್ರೀಮತಿ ಬಿ.ಎಸ್. ರೂಪ, ಸಹಶಿಕ್ಷಕಿ, ಸ.ಹಿ.ಪ್ರಾ.ಶಾಲೆ (ಬಾಲಕರ) ಚೌಳಹಿರಿಯೂರು ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಇವರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ.

**ಉಲ್ಲೇಖ:** 1) ಕ್ಷೇತ್ರಶಿಕ್ಷಣಾಧಿಕಾರಿಗಳು ಕಡೂರು ಇವರ ಪತ್ರ ಸಂಖ್ಯೆ: ಸಿ8: ಸಾಶಿಇ: ಅಗೈಹಾ:56:2004-2005 ದಿನಾಂಕ:28.01.2005, ದಿನಾಂಕ:18.03.2005, ದಿನಾಂಕ:13.04.2005, ದಿನಾಂಕ:17.09.2005, ದಿನಾಂಕ:07.12.2005, ದಿನಾಂಕ:20.03.2006.

2) ವಿಜಯ ಕರ್ನಾಟಕ ರಾಜ್ಯ ದಿನ ಪತ್ರಿಕೆಯಲ್ಲಿ ದಿನಾಂಕ:23.08.2005 ರಂದು ಶಿಕ್ಷಕಿಗೆ ನೀಡಿದ ನೋಟೀಸು ಪ್ರಕಟಣೆ.

3) ಈ ಕಛೇರಿಯ ಪತ್ರ ಸಮ ಸಂಖ್ಯೆ ದಿನಾಂಕ:03.01.2006, ದಿನಾಂಕ:22.04.2006, ದಿನಾಂಕ:05.07.2006.

4) ವಿಚಾರಣಾಧಿಕಾರಿಗಳ ವರದಿ ದಿನಾಂಕ:28.09.2006.

5) ಈ ಕಛೇರಿಯ ಪತ್ರ ಸಮ ಸಂಖ್ಯೆ: ದಿನಾಂಕ:15.10.2006.

6) ವಿಜಯ ಕರ್ನಾಟಕ ರಾಜ್ಯ ದಿನ ಪತ್ರಿಕೆಯಲ್ಲಿ ದಿನಾಂಕ:07.11.2006 ರಂದು ಶಿಕ್ಷಕಿಗೆ ನೀಡಿದ ನೋಟೀಸು ಪ್ರಕಟಣೆ.

7) ಕ್ಷೇತ್ರ ಶಿಕ್ಷಣಾಧಿಕಾರಿಗಳು ಕಡೂರು ಇವರ ಪತ್ರ ಸಂಖ್ಯೆ: ಸಿ3: ಸಾಶಿಇ: ಅಗೈಹಾ:56: 2004-2005 ದಿನಾಂಕ:02.12.2006.

8) ಸರಕಾರದ ಅಧೀನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಕರ್ನಾಟಕ ಸರಕಾರದ ಸಚಿವಾಲಯ, ವಿಧಾನ ಸೌಧ, ಬೆಂಗಳೂರು ರವರ ಸುತ್ತೋಲೆ ಸಂಖ್ಯೆ: ಸಿಆಸುಇ:18: ಸೇಇವಿ: 2001 ದಿನಾಂಕ:14.09.2001.

**ಪ್ರಸ್ತಾವನೆ:**

ಶ್ರೀಮತಿ ಬಿ.ಎಸ್. ರೂಪ ಸಹಶಿಕ್ಷಕಿ ಸ.ಹಿ.ಪ್ರಾ. ಶಾಲೆ (ಬಾಲಿಕರ) ಚೌಳಹಿರಿಯೂರು ಕಡೂರು ತಾಲ್ಲೂಕು ಇವರು ದಿನಾಂಕ: 18.08.2004 ರಿಂದ 27.08.2004 ರವರೆಗೆ ಮತ್ತು ದಿನಾಂಕ:16.09.2004 ರಿಂದ 31.10.2004 ರವರೆಗೆ ಗಳಿಕೆ ರಜೆಗೆ ಮುಖ್ಯ ಶಿಕ್ಷಕರ ಮುಖಾಂತರ ರಜಾ ಅರ್ಜಿ ಸಲ್ಲಿಸಿ ಮಂಜೂರಾತಿ ಪಡೆದುಕೊಳ್ಳದೇ ಅನಧೀಕೃತ ಗೈರು ಹಾಜರಾಗಿದ್ದು ಉಲ್ಲೇಖ (1)ರ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸದರಿ ಶಿಕ್ಷಕರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ತಿಳಿಸಿದ್ದು ನಂತರ ಸದರಿ ಶಿಕ್ಷಕಿ ಕರ್ತವ್ಯಕ್ಕೆ ಇನ್ನೂ ಹಾಜರಾಗದೆ ಕಾರಣ ಉಲ್ಲೇಖ (1)ರ ಪತ್ರ ದಿನಾಂಕ:07.12.2005ರಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸೂಕ್ತ ಕ್ರಮಕ್ಕಾಗಿ ಈ ಕಛೇರಿಗೆ ಸಲ್ಲಿಸಿರುತ್ತಾರೆ.

ಅದರಂತೆ ಸದರಿ ಶಿಕ್ಷಕರಿಗೆ ಕರ್ನಾಟಕ ನಾಗರೀಕಾ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) 1957ರ ನಿಯಮಗಳಂತೆ ಉಲ್ಲೇಖ (3)ರ ಈ ಕಛೇರಿಯ ಪತ್ರದಲ್ಲಿ ಗೈರು ಹಾಜರಿ ಬಗ್ಗೆ ಕಾರಣ ಕೇಳಿ ನೋಟೀಸು ನೀಡಲಾಗಿದೆ. ಆದರೆ ಸದರಿ ಶಿಕ್ಷಕರು ಯಾವುದೇ ಸಮಜಾಯಿಷಿ ನೀಡದೇ ಕರ್ತವ್ಯಕ್ಕೆ ಹಾಜರಾಗದೇ ಇದ್ದರಿಂದ ಸಿ.ಸಿ.ಎ. ನಿಯಮಾವಳಿಯಂತೆ ಉಲ್ಲೇಖ (3)ರ ದಿನಾಂಕ:22.04.2006ರಲ್ಲಿ ಗೈರು ಹಾಜರಿಗೆ ಆರೋಪ ಪಟ್ಟಿ ಜಾರಿ ಮಾಡಿ ಲಿಖಿತ ಹೇಳಿಕೆ ನೀಡಲು ತಿಳಿಸಲಾಗಿತ್ತು. ಶಿಕ್ಷಕಿಯರಿಂದ ಇದುವರೆವಿಗೂ ಯಾವುದೇ ಲಿಖಿತ ಹೇಳಿಕೆ ಬಾರದೇ ಇರುವುದರಿಂದ ಇಲಾಖಾ ವಿಚಾರಣೆಗಾಗಿ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ಉಲ್ಲೇಖ (3)ರ ದಿನಾಂಕ:05.07.2006 ರಂತೆ ನೇಮಕ ಮಾಡಲಾಯಿತು. ಉಲ್ಲೇಖ (4) ರಂತೆ ವಿಚಾರಣಾಧಿಕಾರಿಗಳು ಸದರಿ ಶಿಕ್ಷಕಿಯರ ಗೈರುಹಾಜರಿ ಸಂಬಂಧ ವಿಚಾರಣೆ ನಡೆಸಿ ವರದಿಯಲ್ಲಿ ಶಿಕ್ಷಕಿಯು ದಿನಾಂಕ:18.08.2004 ರಿಂದ 27.08.2004 ರವರೆಗೆ ಮತ್ತು 16.09.2004 ರಿಂದ 31.10.2004 ರವರೆಗೆ ಗಳಿಕೆ ರಜೆ ಅರ್ಜಿ ನೀಡಿ ರಜೆ ಮೇಲೆ ತೆರಳಿ ದಿನಾಂಕ:01.11.2004 ಕ್ಕೆ ಕರ್ತವ್ಯಕ್ಕೆ ಹಾಜರಾಗದೇ ದಿನಾಂಕ:01.11.2004 ರಿಂದ 2 ವರ್ಷಗಳವರೆಗೆ ವೇತನ ರಹಿತ ರಜೆ ಕೋರಿ ದಿನಾಂಕ:02.02.2005 ರಂದು ರಜೆ ಅರ್ಜಿ ಕಳಿಸಿ ತೆರಳಿರುತ್ತಾರೆ. ಈ ಎಲ್ಲಾ ಪ್ರಕರಣಗಳಲ್ಲಿ ನಿಯಮಾನುಸಾರ ಪೂರ್ವನುಮತಿಯಾಗಲಿ, ರಜೆ ಮಂಜೂರಾತಿಯಾಗಲಿ ಪಡೆದಿರುವುದಿಲ್ಲ. ಹಾಗಾಗಿ ಶಿಕ್ಷಕಿಯ ಅನಧಿಕೃತ ಗೈರು ಹಾಜರಾಗಿರುವುದು ಮತ್ತು ಕರ್ತವ್ಯಕ್ಕೆ ಅಡಚಣೆ ಮಾಡಿರುವುದು ಕೆ.ಸಿ.ಎಸ್.ಆರ್. ನಿಯಮ 106ಎ ರಂತೆ ಅಪರಾಧವಾಗಿರುತ್ತದೆ ಮತ್ತು ಕರ್ನಾಟಕ ನಾಗರೀಕಾ ಸೇವಾ (ನಡತೆ) 1966ರ ನಿಯಮ 3ರ ಉಲ್ಲಂಘನೆಯಾದಂತಾಗಿದೆಂದು ಅಭಿಪ್ರಾಯ ನೀಡಿರುತ್ತಾರೆ.

ಉಲ್ಲೇಖ (5)ರಂತೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ಕಡೂರು ಇವರ ಮುಖಾಂತರ ಸದರಿ ಶಿಕ್ಷಕಿಯರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ಅಂತಿಮ ನೋಟೀಸು ಜಾರಿ ಮಾಡಲಾಗಿದೆ. ಹಾಗೂ ರಾಜ್ಯ ಮಟ್ಟದ ದಿನ ಪತ್ರಿಕೆಯಾದ ವಿಜಯ ಕರ್ನಾಟಕ ದಿನಾಂಕ: 17.11.2006ರಲ್ಲಿ ಪುಟಸಂಖ್ಯೆ 2ರಲ್ಲಿ ಶಿಕ್ಷಕಿಯರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ತಿಳಿಸಿ ಹಾಜರಾಗದಿದ್ದಲ್ಲಿ ನಿಯಮಾನುಸಾರ ನಿಮ್ಮನ್ನು ಸೇವೆಯಿಂದ ವಜಾ ಮಾಡಲಾಗುವುದೆಂದು ನೋಟೀಸು ನೀಡಲಾಗಿತ್ತು. ಆದರೆ ಸದರಿ ಶಿಕ್ಷಕರು ನೋಟೀಸು ನೀಡಿದ 15 ದಿನಗಳು ಕಳೆದರೂ ಶಾಲಾ ಕರ್ತವ್ಯಕ್ಕೆ ಹಾಜರಾಗದ ಕಾರಣ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಇ6:ಸಾ.ಶಿ.ಇ: ದೂರು: 101: 2004-05, ದಿನಾಂಕ:19ನೇ ಡಿಸೆಂಬರ್, 2006**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಬಸವಣ್ಣಪ್ಪ, ಉಪನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು ಸಾಶಿಇ ಚಿಕ್ಕಮಗಳೂರು ಆದ ನಾನು ಕರ್ನಾಟಕ ನಾಗರೀಕಾ ಸೇವಾ ನಿಯಮ 108ರಂತೆ ಹಾಗೂ ಉಲ್ಲೇಖ (8)ರ ಸುತ್ತೋಲೆಯಂತೆ ಶ್ರೀಮತಿ ಬಿ.ಎಸ್.ರೂಪ ಸಹಶಿಕ್ಷಕರು ಸಹಿ ಪ್ರಾ ಶಾಲೆ (ಬಾಲಿಕರ) ಚೌಳಹಿರಿಯೂರು ಕಡೂರು ತಾಲ್ಲೂಕು ಚಿಕ್ಕಮಗಳೂರು ಜಿಲ್ಲೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಲಾಗಿದೆಯೆಂದು ಆದೇಶಿಸಿದೆ.

**ಶ್ರೀ ಬಸವಣ್ಣಪ್ಪ**
ಶಿಸ್ತು ಪ್ರಾಧಿಕಾರಿಗಳು ಹಾಗೂ ಜಿಲ್ಲಾ ಉಪನಿರ್ದೇಶಕರು,
ಸಾ.ಶಿ.ಇ. ಚಿಕ್ಕಮಗಳೂರು.

ಪಿ.ಆರ್.13

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ತಿದ್ದುಪಡಿ ಅಧಿಕೃತ ಜ್ಞಾಪನ

## ನಂ. ಎಲ್.ಎನ್.ಡಿ (ಎನ್) ಸಿ.ಆರ್. 27/ 01-02, ಬೆಂಗಳೂರು, ದಿನಾಂಕ:13ನೇ ಡಿಸೆಂಬರ್, 2006

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಶಿವನಹಳ್ಳಿ ಗ್ರಾಮದ ಸ.ನಂ.3ರಲ್ಲಿ 1.08 ಎಕರೆ: ಗುಂಟೆ ಸರ್ಕಾರಿ ಬೀಳು ಜಮೀನನ್ನು ಸರ್ಕಾರಿ ಶಾಲೆ ಮತ್ತು ಆಟದ ಮೈದಾನಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಅಧಿಕೃತ ಜ್ಞಾಪನದ ಸಮ ಸಂಖ್ಯೆ: ದಿನಾಂಕ:03.08.2006.

2) ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ: ಸಿ.ಆರ್: 264/ 03-04, ದಿನಾಂಕ:08.11.2006.

3) ರಾಜಾಜಿನಗರ ಕ್ಷೇತ್ರದ ವಿಧಾನಸಭಾ ಸದಸ್ಯರ ಪತ್ರದ ದಿನಾಂಕ:06.11.2006.

ರಾಜಾಜಿನಗರ ಕ್ಷೇತ್ರದ ವಿಧಾನಸಭಾ ಸದಸ್ಯರು ಮನವಿ ಸಲ್ಲಿಸಿ ಉಲ್ಲೇಖ (1)ರ ಈ ಕಛೇರಿ ಅಧಿಕೃತ ಜ್ಞಾಪನದಲ್ಲಿ 1.08 ಎಕರೆ: ಗುಂಟೆ ಪ್ರದೇಶವನ್ನು ಸರ್ಕಾರಿ ಕಾಲೇಜು, ಆಟದ ಮೈದಾನ ಮತ್ತು ಗ್ರಂಥಾಲಯದ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳಲು ಸಾರ್ವಜನಿಕ ಶಿಕ್ಷಣ ಇಲಾಖೆಗೆ ಕಾಯ್ದಿರಿಸಿರುವ ಜಮೀನಿನ ಆದೇಶವನ್ನು ರದ್ದುಪಡಿಸಿ ಪ್ರಶ್ನಿತ ಜಮೀನನ್ನು ಸರ್ಕಾರಿ ಕಾಲೇಜು ಮತ್ತು ಆಟದ ಮೈದಾನಕ್ಕಾಗಿ ಕಾಲೇಜು ಶಿಕ್ಷಣ ಇಲಾಖೆಗೆ ಮತ್ತು ಸಾರ್ವಜನಿಕ ಗ್ರಂಥಾಲಯ ಪ್ರಾರಂಭಿಸಲು ನಗರ ಕೇಂದ್ರ ಗ್ರಂಥಾಲಯರವರಿಗೆ ಹಸ್ತಾಂತರಿಸಲು ಕ್ರಮ ಜರುಗಿಸಬೇಕೆಂದು ಕೋರಿರುತ್ತಾರೆ. ಈ ಬಗ್ಗೆ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಉಲ್ಲೇಖ (2)ರ ಪತ್ರದಲ್ಲಿ ವರದಿ ಸಲ್ಲಿಸಿ ಮಾನ್ಯ ಶಾಸಕರ ಮನವಿಯನ್ನು ಪರಿಗಣಿಸಿ ಅಧಿಕೃತ ಜ್ಞಾಪನದ ಮಾರ್ಪಾಡು ಆದೇಶವನ್ನು ಹೊರಡಿಸಲು ಕೋರಿರುತ್ತಾರೆ.

ತಹಶೀಲ್ದಾರ್ ವರದಿಯಂತೆ ಮತ್ತು ಮಾನ್ಯ ರಾಜಾಜಿನಗರ ಕ್ಷೇತ್ರದ ಶಾಸಕರ ಪತ್ರದಂತೆ ಉಲ್ಲೇಖ (1)ರ ಅಧಿಕೃತ ಜ್ಞಾಪನದಲ್ಲಿನ ಶಿವನಹಳ್ಳಿ ಗ್ರಾಮದ ಸ.ನಂ.3ರಲ್ಲಿ 1.08 ಎಕರೆ: ಗುಂಟೆ ಜಮೀನು ಸರ್ಕಾರಿ ಕಾಲೇಜು, ಆಟದ ಮೈದಾನ ಮತ್ತು ಗ್ರಂಥಾಲಯದ ಉದ್ದೇಶಕ್ಕೆ ಉಪಯೋಗಿಸಿಕೊಳ್ಳಲು ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಉತ್ತರ ವಲಯ ಇವರ ಬದಲಾಗಿ ಕಾಲೇಜು ಶಿಕ್ಷಣ ಇಲಾಖೆ ರವರಿಗೆ 1.03 ಎಕರೆ: ಗುಂಟೆ ಜಮೀನು ಮತ್ತು ಮುಖ್ಯ ಗ್ರಂಥಾಧಿಕಾರಿ, ನಗರ ಕೇಂದ್ರ ಗ್ರಂಥಾಲಯ, ಬೆಂಗಳೂರು ಇವರಿಗೆ 0.05 ಗುಂಟೆ ಜಮೀನನ್ನು ಹಸ್ತಾಂತರಿಸಲು ತಿದ್ದುಪಡಿ ಆದೇಶ ಹೊರಡಿಸಲಾಗಿದೆ. ಇನ್ನು ಉಳಿದಂತೆ ದಿನಾಂಕ:03.08.2006 ಅಧಿಕೃತ ಜ್ಞಾಪನದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,

ಪಿ.ಆರ್.14 ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ತಿದ್ದುಪಡಿ ಅಧಿಕೃತ ಜ್ಞಾಪನ

## ನಂ. ಎಲ್.ಎನ್.ಡಿ (ಎನ್) ಸಿ.ಆರ್. 125/ 04-05, ಬೆಂಗಳೂರು, ದಿನಾಂಕ:13ನೇ ಡಿಸೆಂಬರ್, 2006

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ವಡ್ಡರಹಳ್ಳಿ ಗ್ರಾಮದ ಸ.ನಂ.27 ಮತ್ತು 38 ರಲ್ಲಿ 23.28 ಎಕರೆ: ಗುಂಟೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಮಂಜೂರು ಮಾಡಿರುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರದ ಸಂ. ಆರ್.ಡಿ.750 ಎಲ್.ಜಿ.ಬಿ.2006, ದಿನಾಂಕ:26.09.2006.

2) ಈ ಕಛೇರಿಯ ಅಧಿಕೃತ ಜ್ಞಾಪನದ ಸಮ ಸಂಖ್ಯೆ ದಿನಾಂಕ:06.07.2005.

3) ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ: ಸಿಆರ್: 144/ 04-05, ದಿನಾಂಕ:21.04.2006.

ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ವಡ್ಡರಹಳ್ಳಿ ಗ್ರಾಮದ ಸ.ನಂ.27ರಲ್ಲಿ 15.38 ಎಕರೆ: ಗುಂಟೆ ಮತ್ತು ಸ.ನಂ.38ರಲ್ಲಿ 7.32 ಎಕರೆ: ಗುಂಟೆ ಒಟ್ಟು 23.28 ಎಕರೆ: ಗುಂಟೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಬಸ್ ಘಟಕ ನಿರ್ಮಾಣ ಮಾಡಲು ಉಲ್ಲೇಖ (2)ರಲ್ಲಿ ಈ ಕಛೇರಿಯ ಅಧಿಕೃತ ಜ್ಞಾಪನದಲ್ಲಿ ಮಂಜೂರು ಮಾಡಲಾಗಿದೆ. ಈ ಬಗ್ಗೆ ಉಲ್ಲೇಖ (3)ರ ತಹಶೀಲ್ದಾರರ ವರದಿಯಂತೆ ಜಮೀನು ಅಳತೆ ಮಾಡುವ ಸಂದರ್ಭದಲ್ಲಿ ಸ.ನಂ.27ರಲ್ಲಿ 11.01 ಎಕರೆ: ಗುಂಟೆ ಮತ್ತು ಸಂ.ನಂ.38ರಲ್ಲಿ 12.27 ಎಕರೆ: ಗುಂಟೆ ಒಟ್ಟು 23.28 ಎಕರೆ: ಗುಂಟೆ ಜಮೀನು ಲಭ್ಯವಿದ್ದು, ಇದರಂತೆ ಬದಲಾವಣೆ ಮಾಡಿ ತಿದ್ದುಪಡಿ ಆದೇಶವನ್ನು ಹೊರಡಿಸಬೇಕೆಂದು ಕೋರಿರುತ್ತಾರೆ.

ತಹಶೀಲ್ದಾರ್ ರವರ ವರದಿಯಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದ್ದು, ಉಲ್ಲೇಖ (1)ರ ಸರ್ಕಾರದ ಪತ್ರದಲ್ಲಿ ವಡ್ಡರಹಳ್ಳಿ ಗ್ರಾಮದ ಸ.ನಂ.27ರಲ್ಲಿ 15.32 ಎಕರೆ: ಗುಂಟೆ ಬದಲಾಗಿ 11.01 ಗುಂಟೆ ಮತ್ತು ಸ.ನಂ.38ರಲ್ಲಿ 7.32 ಎಕರೆ: ಗುಂಟೆ ಬದಲಾಗಿ 12.27 ಎಕರೆ: ಗುಂಟೆ ಎಂದು ಬದಲಾವಣೆ ಮಾಡಿ ಪರಿಷ್ಕೃತ ಆದೇಶವನ್ನು ನೀಡಲಾಗಿರುತ್ತದೆ.

ಸರ್ಕಾರದ ಉಲ್ಲೇಖ (1)ರ ಆದೇಶದಂತೆ ಉಲ್ಲೇಖ (2)ರ ಈ ಕಛೇರಿಯ ಅಧಿಕೃತ ಜ್ಞಾಪನದಲ್ಲಿ ನಮೂದಿಸಿರುವ ವಡ್ಡರಹಳ್ಳೀ ಗ್ರಾಮದ ಸ.ನಂ.27ರಲ್ಲಿ 15.32 ಎಕರೆ: ಗುಂಟೆ ಬದಲಾಗಿ 11.01 ಗುಂಟೆ ಮತ್ತು ಸ.ನಂ38ರಲ್ಲಿ 7.32 ಎಕರೆ: ಗುಂಟೆ ಬದಲಾಗಿ 12.27 ಎಕರೆ: ಗುಂಟೆ ಎಂದು ಬದಲಾವಣೆ ಮಾಡಿ ತಿದ್ದುಪಡಿ ಆದೇಶ ಹೊರಡಿಸಲಾಗಿದೆ ಇನ್ನು ಉಳಿದಂತೆ ದಿನಾಂಕ:06.07.2005ರ ಅಧಿಕೃತ ಜ್ಞಾಪನದಲ್ಲಿ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,

ಪಿ.ಆರ್.15 ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ

**ನಂ. ಎಲ್.ಆರ್.ಎಫ್.(ದ) (109) ಸಿ.ಆರ್.15/ 2006-07, ಬೆಂಗಳೂರು, ದಿನಾಂಕ:4ನೇ ಡಿಸೆಂಬರ್, 2006**

**ವಿಷಯ:** ಸರ್ವೋದಯ ಎಜುಕೇಷನ್ ಟ್ರಸ್ಟ್ (ರಿ) ಬೆಂಗಳೂರುರವರು ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಯಲಚಗುಪ್ಪೆ, ಗ್ರಾಮದ ಸ.ನಂ.163 ರಲ್ಲಿ 3-01 ಎ/ಗುಂ ವಿಸ್ತೀಣದ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಅನುಮತಿ ಕೋರಿರುವ ಬಗ್ಗೆ.

ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಯಲಚಗುಪ್ಪೆ ಗ್ರಾಮದ ಸ.ನಂ.163ರಲ್ಲಿ 3-01 ಎ/ಗುಂ ವಿಸ್ತೀರ್ಣದ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಸರ್ವೋದಯ ಎಜುಕೇಷನ್ ಟ್ರಸ್ಟ್ (ರಿ) ಬೆಂಗಳೂರು ರವರು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗ, ಬೆಂಗಳೂರು ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್/ (109) ಸಿಆರ್-17/ 06-07 ದಿನಾಂಕ:14.11.2006ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ.163 ರಲ್ಲಿ 3-01 ಎ/ಗುಂ ಜಮೀನನ್ನು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (i)(ii)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು, ಕೆಂಗೇರಿ ಉಪ ನೊಂದಣಾಧಿಕಾರಿಗಳ ಕಛೇರಿ, ಬೆಂಗಳೂರು ಇಲ್ಲಿ ರಿಜಿಸ್ಟರ್ ನಂ.ಕೆ.ಇ.ಎನ್.ಡಿ-276 ದಿನಾಂಕ:03.04.2006ರಂದು ನೊಂದಾಯಿಸಲ್ಪಟ್ಟಿದೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (i)(ii) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಯಲಚಗುಪ್ಪೆ ಗ್ರಾಮದ ಸ.ನಂ.163 ರಲ್ಲಿ 3-01 ಎ/ಗುಂ ವಿಸ್ತೀರ್ಣದ ಜಮೀನನ್ನು ಸರ್ವೋದಯ ಎಜುಕೇಷನ್ ಟ್ರಸ್ಟ್ (ರಿ) ನಂ.11/2, ಮಾಗಡಿ ಮೈನ್ ರೋಡ್, ಅಗ್ರಹಾರ ದಾಸರಹಳ್ಳಿ, ಬೆಂಗಳೂರು-79 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(i)(ii)ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

### ಷರತ್ತುಗಳು

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇ.55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಸಿ.ಡಿ.ಪಿ. ಹೊರವಲಯ (ಓ.ಡಿ.ಪಿ.) ವಲಯದಲ್ಲಿ ಬರುತ್ತಿದ್ದು ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಸಂಬಂಧಿಸಿದ ಯೋಜನಾ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ., ಓ.ಡಿ.ಪಿ. ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲೇಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),

ಪಿ.ಆರ್.16 ಬೆಂಗಳೂರು ಜಿಲ್ಲೆ, ಬೆಂಗಳೂರು.

**OFFICE OF THE COMMISSIONER, BANGALORE DEVELOPMENT AUTHORITY, BANGALORE**
**NOTIFICATION UNDER SECTION 17(1) AND (3) OF BDA ACT 1976**
**NO. BDA/ COMMR/ LAO/ 4042/ 06-07, Dated:19th December, 2006**

Whereas it appears to the Bangalore Development Authority that the lands specified in the schedule here to likely to be needed for the public purpose i.e. for widening of. Airport Road from HAL Airport to Kundalahalli cross via Marath halli.

Notice to that effect is hereby given to all whom it may concern in accordance with the provisions of sub-section (1) and (3) of section 17 of BDA Act 1976 (Karnataka Act No.12 of 1976). In accordance with section 36 of BDA Act the Land Acquisition Officer, Bangalore Development Authority, bangalore his staff and workmen are hereby authorised to exercise the powers conferred under section 4(2) of L.A. Act 1894. Any persons interested in this land may perfer his/ her objections within 30 days from the date of publication of this Notification to the Land Acquisition Officer., BDA., T. Chowdaiah Road, Bangalore-560020.

All persons interested in the said lands are hereby warned not to obstruct or Interfere with any surveyor or other persons employed upon the said lands for the purpose of the said acquisition. Any contracts for the disposal of the said lands by sale, lease, mortgage, assignment, exchange or otherwise or any other outlay or improvements made there in without the sanction of the Deputy Commissioner (Land Acquisition), Bangalore Development Authority, Bangalore after the date of publication of this Notification will under section 24 (clause seventy) of the LA Act 1894, be disregarded by the Officer assessing compensation for such part of the said lands as may be finally acquired.

The particulars of the scheme, the map of the area comprised therein and the statement specifying the lands which are proposed to be acquired, may be seen in the Office of the Land Acquisition Officer, Bangalore Development Authority, Bangalore during the office hours, on all working Days.

**SCHEDULE**

**District: Bangalore** **Taluk: Bangalore East** **Hobli: Varthur** **Village: Munnekolal**

| Sl. No. | Name of the Khatedar/ Anubhavader | Sy.No. | Whether Dry/Wet Garden | Total Extent A- G | Kharab Extent A- G | Remaining Extent A- G | Assessment Rs. Ps. | Extent required A- G | Boundaries | | | |
|---|---|---|---|---|---|---|---|---|---|---|---|---|
| | | | | | | | | | East Sy.No. | West Sy.No. | North Sy.No. | South Sy.No. |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 1. | Susain charien W/o M.J. Charien. | 20 | Dry | 7-19 | 1-01 | 6-18 | 12-0 | 0-07.90 | Road | 21 | varthur | Remaining . Land |
| | Nainan Nilanim Charien | | | | | | | | | | | |
| | G. Ramaswamy reddy S/o Late guarava Reddy | | | | | | | | | | | |
| | Babu Charien S/o Charien | | | | | | | | | | | |
| | Mala Babu W/o Babu Charien | | | | | | | | | | | |
| | P. Venkatesha reddy | | | | | | | | | | | |
| | Arun | | | | | | | | | | | |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| | Ramaswamy S/o Chinnappa<br>Vittal Devuru<br>Cherian Sabastian<br>Abdul Kadhir Denjapaladi<br>M.T. Thomas<br>Susain Charien W/o M.J. Charien | | | | | | | | | | | |
| 2. | Susain Charien | 30 | Dry | 0-05 | 0-01 | 0-04 | 0-06 | 0-05 | 31 | Road | Sy.No. 29 | Road |
| 3. | Suresh pahallaj makheej | 31 | Dry | 3-06 | 0-03 | 3-03 | 5-82 | 0-14.50 | 33,35 | 30 | Remaining Land | Varthur Road |
| 4. | V. Ramiah Reddy<br>Shamanna Reddy<br>Munirathnamma<br>Krishna Reddy<br>Srirama S/o Venkata chalapathi<br>Shammanna Reddy<br>Yeshodhamma W/o Gopal Reddy<br>Smt M. Yeshodh amma W/o Krishna Reddy<br>N. Prabhavathi W/o Late P. Krishna Reddy | 35/1A | Dry | 0-30 | 0-01 | 0-29 | 0-54 | 0-01-90 | 36 | 35/1B | Remaining Land | Varthur Road |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 5. | Venkatasubbarama reddy S/o Narayana reddy<br>Chikkaannayareddy<br>Subaramareddy<br>Nagalingareddy | 35/1B | Dry | 1-09 | 0-07 | 1-02 | 0-78 | 0-07.33 | 35/1A | 31 | 34 and Remaining. Land | Varthur Road |
| 6. | K.C. Abrahim | 102/1C | Dry | 3-15 | 0-18 | 2-37 | 3-68 | 0-06.40 | Railway Line | 134 | varthur Road | Remaining Land |
| 7. | Ramachandrareddy S/o Kourappa<br>Krishna reddy S/o Kourappa @ Muniswamy reddy<br>Shanthamma W/o Late. Srinivasa reddy<br>Jayarama reddy S/o Kourappa @ Muniswamy reddy<br>Narayana reddy S/o Kourappa @ Muniswamy reddy | 102/2C | Dry | 0-04 | - | 0-04 | 0-13 | 0-01.15 | Railway Line | 102/1C | Railway Line | Remaining Land |
| 8. | Kharab Gomala | 134 | | 4-37 | 4-37 | | | 0-03.27 | 102 | 135 | Varthur Road | Remaining Land |
| | | | | | | | **Total** | **1-07.45** | | | | |

Commissioner,
Bangalore Development Authority,
Bangalore.

PD-8

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ-09/06-07, ದಿನಾಂಕ:16ನೇ ಡಿಸೆಂಬರ್ 2006**

**ಉಪಸ್ಥಿತರು** : ಶ್ರೀ ಜಿ.ಜಯರಾಮಯ್ಯ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ
**ಫಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ,
ಆನವಟ್ಟಿ ವಲಯ, ಆನವಟ್ಟಿ.
**ಆರೋಪಿಗಳು** : ಪತ್ತೆಯಾಗಿರುವುದಿಲ್ಲ.
**ಭಾದ್ಯತೆದಾರರು** : ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:-**

ದಿ: 07-08-2006ರಂದು ಸೊರಬ ತಾಲ್ಲೂಕು ಕುಪ್ಪಗಡ್ಡೆ ಹೋಬಳಿ ಹಾಯ ನೆಗವಾಡಿ ಮಾರ್ಗವಾಗಿ ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಆನವಟ್ಟಿ ಮತ್ತು ಸಿಬ್ಬಂದಿಯವರು ರಾತ್ರಿ ಗಸ್ತು ಮಾಡಿಕೊಂಡು ದಿ: 08-08-06ರಂದು ಬೆಳಗಿನ ಜಾವ 5-30ರ ಸಮಯದಲ್ಲಿ ಬರುತ್ತಿರುವಾಗ ಹಾಯ ಗ್ರಾಮದ ಸಮೀಪ ಬೆಟ್ಟದ ಕುರ್ಲಿ ಮೀಸಲು ಅರಣ್ಯ ಪ್ರದೇಶದಲ್ಲಿ 1973ರ ಸಾಗುವಾನಿ ನೆಡುತೋಪಿನಲ್ಲಿ ಒಂದು ವಾಹನ ನಿಂತಿರುವುದು ಪರಿಶೀಲಿಸಿ ನೋಡಿ ವಾಹನ ಟೆಂಪೋಟ್ರಾಕ್ಸ್ ಕೆಎ-27-ಎಂ-671 ಆಗಿದ್ದು, ವಾಹನದೊಳಗೆ ಗರಗಸದಿಂದ ಕೊಯ್ತು ಮಾಡಿದ ಸಾಗುವಾನಿ ತುಂಡುಗಳನ್ನು ತುಂಬಿರುವುದು ಕಂಡುಬಂದಿತು. ಇವುಗಳ ಮೇಲೆ ಯಾವುದೇ ಇಲಾಖಾ ಛಾಪಾ ಇರಲಿಲ್ಲ. ಹಾಗೂ ಇದನ್ನು ಸಾಗಿಸಲು ರಹದಾರಿ ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಮತ್ತು ಸಾಗುವಾನಿ ತುಂಡನ್ನು ಇಲಾಖಾ ಪರ ಜಪ್ತಿಮಾಡಿ ಪ್ರಥಮ ವರ್ತಮಾನ ವರದಿ, ಮತ್ತು ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಆನವಟ್ಟಿ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 68/06-07 ದಿ:08-08-06ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿದೆ.

ನಂತರ ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ-09/06-07 ದಿ: 14-08-06ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಹಾವೇರಿ ಇವರಿಗೆ ಪತ್ರ ಬರೆದು ಈ ವಾಹನವು ಯಾರ ಹೆಸರಿಗೆ ನೋಂದಣಿಯಾಗಿದೆ ಎನ್ನುವ ಬಗ್ಗೆ ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಲಾಗಿತ್ತು. ಆದರೆ ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ವಾಹನದ ಆರ್.ಸಿ. ಮಾಲೀಕರಿಗೆ 71(ಬಿ)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲ. ಅಲ್ಲದೇ ಈ ವಾಹನವನ್ನು ಹಾಗೆ ತುಂಬ ಸಮಯ ನಿಲ್ಲಿಸಿದಲ್ಲಿ ವಾಹನದ ಬಿಡಿಭಾಗಗಳು ಹಾಳಾಗಿ ಸರ್ಕಾರಕ್ಕೆ ನಷ್ಟ ಉಂಟಾಗುವ ಸಂಭವವಿರುವುದರಿಂದ ಈ ಕೆಳಗಿನಂತೆ ಕ್ರಮ ಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ: 02-12-2006ರಂದು ವಾದ ಮಂಡಿಸಿ ಈ ವಾಹನದಲ್ಲಿ ಸಾಗುವಾನಿ ತುಂಡುಗಳನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಸಾಗುವಾನಿ ತುಂಡನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಯಾರೂ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡದಿರುವ ಬಗ್ಗೆ ಈ ನ್ಯಾಯಾಲಯಕ್ಕೆ ಯಾವುದೇ ಸಾಕ್ಷಾಧಾರಗಳನ್ನು ಹಾಜರ್ಪಡಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಸಾಗುವಾನಿ ತುಂಡನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿ: 05-09-2006ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳೂಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯನ್ನು ದಿ: 21-09-06ರಂದು ಗೆಜೆಟ್‌ನಲ್ಲಿ ಹಾಗೂ ದಿ: 23-09-06ರಂದು ಮನೋಭೂಮಿ ಮತ್ತು ದಿ: 27-10-06ರಂದು ಈ ಪತ್ರಿಕೆ ದೈನಿಕ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು, ಆರ್. ಸಿ.ಮಾಲೀಕರಿಗೆ 71ಬಿ ಪ್ರಕಾರ ಕಾರಣ ಕೇಳಿ ಪತ್ರ ಜಾರಿ ಮಾಡಿ 30 ದಿನಗಳಾದರು, ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕಾನೂನುಬದ್ಧವಾಗಿ ದಾಖಲೆಗಳನ್ನು ಅರ್ಜಿ ಮೂಲಕ ಸಲ್ಲಿಸಿ ವಾಹನ ಬಿಡುಗಡೆಗೆ ಕೋರಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿಲ್ಲವೆನ್ನುವುದನ್ನು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರು ಜಪ್ತು ಮಾಡಿದ ವಾಹನ ಟೆಂಪೋಟ್ರಾಕ್ಸ್ ಕೆಎ-27-ಎಂ-671 ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ತುಂಡು 10=1.222ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:16-12-2006 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

ಪಿ.ಆರ್. 1740

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರಕರಣ ಸಂ: ಸಕಾಅದಾ:ಕಾನಪ:ಡಿವಿಜಿ:ಸಿಆರ್-95/2006, ದಿನಾಂಕ: 2ನೇ ಡಿಸೆಂಬರ್ 2006**

**ಅರ್ಜಿದಾರರು:**

ಶ್ರೀ ಬಾಬ್ಜ್‌ನ್ ಸಾಬ್ ಬಿನ್ ಹುಸೇನ್‌ಸಾಬ್
ಮತ್ತು ಇತರ 3 ಜನರು
ಅಮರಪ್ಪ ತೋಟ ನೂರಾನಿ ಮಸೀದಿ ರಸ್ತೆ,
ದಾವಣಗೆರೆ

**ವಿರುದ್ಧ**

**ಪ್ರತಿವಾದಿಗಳು:**

1. ಜಮಾಲ್ ಬಿನ್ ಫಕ್ರಧೀನ್ ಸಾಬ್ ಲಾರಿ ಮಾಲೀಕರು ನಂ ಕೆ.ಎ. 17-8614 ಮನೆ ನಂ.602/8 ಬೇಲೂರು ರಸ್ತೆ, ಇಮಾಂನಗರ, ದಾವಣಗೆರೆ.
2. ದಿ ಮ್ಯಾನೇಜರ್ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಎನ್ಕ್ ಕಾಂಪ್ಲೆಕ್ಸ್, ಹುಬ್ಬಳ್ಳಿ.
3. ಕೆ. ಶಫೀವುಲ್ಲಾ ಬಿನ್ ಕೆ. ಬಾಗೂಸಾಬ್ ಮನೆ ನಂ.1.558/4 ಬೇಲೂರು ರಸ್ತೆ, ಇಮಾಂನಗರ, ದಾವಣಗೆರೆ.

**ಪ್ರಕರಣೆ**

ಶ್ರೀ/ಶ್ರೀಮತಿ ಬಾಬ್ಜ್‌ನ್ ಸಾಬ್ s/o ಹುಸೇನ್‌ಸಾಬ್ ಶ್ರೀಮತಿ ರಹಮತ್‌ಭಿ, ಶಮೀಮ್‌ಬಾನು, ಹಾಜ್ರಾನ್‌ಬಾನು ಇವರ ತಂದೆ, ತಾಯಿ ಮತ್ತು ಅಕ್ಕಂದಿರು ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಖಾಜಾ ರವರು ಒಂದನೇ ಪ್ರತಿವಾದಿಗಳಾದ ಜಮಲ್ s/o ಫಕೃದ್ದೀನ್‌ಸಾಬ್ ಇವರ --- ರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭಂದಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್. 1744

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರಕರಣ ಸಂ: ಸಕಾಅದಾ:ಕಾನಪ:ಡಿವಿಜಿ:ಸಿಆರ್-96/2006, ದಿನಾಂಕ: 2ನೇ ಡಿಸೆಂಬರ್ 2006**

**ಅರ್ಜಿದಾರರು:**

ಶ್ರೀಮತಿ ಯಶೋದಮ್ಮ ಕೋಂ ಪರಮೇಶ್ವರಪ್ಪ ಕೆ.
ಮತ್ತು ಇತರೆ 4 ಜನರು ನ್ಯಾಮತಿ ಗ್ರಾಮ ಹೊನ್ನಾಳಿ
(ತಾಲ್ಲೂಕು)

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ಎನ್.ಎಸ್. ಬಸವರಾಜ ಬಿನ್ ಶಿವಲಿಂಗಪ್ಪ ನಂ.ಕೆ.ಎ.14ಎ.3215ನೇ ಲಾರಿ ಮಾಲೀಕರು ನ್ಯಾಮತಿ ಗ್ರಾಮ, ಹೊನ್ನಾಳಿ (ತಾಲ್ಲೂಕು)
2. ಡಿವಿಜನಲ್ ಮ್ಯಾನೇಜರ್, ನ್ಯೂ ಇಂಡಿಯಾ ಆಶ್ಯೂರೆನ್ಸ್ ಕಂ. ಲಿ., ದಾವಣಗೆರೆ

**ಪ್ರಕರಣೆ**

ಶ್ರೀ/ಶ್ರೀಮತಿ (1) ಯಶೋಧಮ್ಮ (ಹೆಂಡತಿ) ಕೋಂ ಪಮೇಶ್ವರಪ್ಪ ಕು ಮೇಘನ, ಕು ಮಮತಾ, ಕುಮಾರ ಚೇತನ್ ಹಾಗೂ ಶ್ರೀಮತಿ ಗಂಗಮ್ಮ ಕೋಂ ಕೆ. ಭೀಮಪ್ಪ ಇವರ ಹೆಂಡತಿ ಮತ್ತು ಮಕ್ಕಳು ಹಾಗೂ ತಾಯಿ ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಪರಮೇಶ್ವರಪ್ಪ ಕೆ. ರವರು ಒಂದನೇ ಪ್ರತಿವಾದಿಗಳಾದ ಶ್ರೀ ಎನ್.ಎಸ್. ಬಸವರಾಜು ಇವರ ಲಾರಿಯಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭಂದಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್. 1745

